# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ : 1118
ಸದಸ್ಯರ ಹೆಸರು : ಶ್ರೀಮತಿ ಭಾರತಿ ಶೆಟ್ಟಿ
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 25.02.2022

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ಬಿಬಿಎಂಪಿ) ವ್ಯಾಪ್ತಿಯ ನಾಗರಬಾವಿ ವೃತ್ತದಲ್ಲಿರುವ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ (ಬಿಎಂಟಿಸಿ) ನಿಲ್ದಾಣದಲ್ಲಿ ಬಸ್ಸುಗಳ ನಿಲುಗಡೆಗಿಂತ ಆಟೋ, ಕಾರು ಇತ್ಯಾದಿ ವಾಹನಗಳೇ ಅಧಿಕವಾಗಿ ನಿಂತಿರುವುದರಿಂದ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ (ಬಿಎಂಟಿಸಿ) ಬಸ್ಸುಗಳು ರಸ್ತೆಯಲ್ಲೇ ನಿಲುಗಡೆ ಮಾಡಿ ಪ್ರಯಾಣಿಕರ ಸುರಕ್ಷತೆಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮಗಳೇನು; | ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬಸ್ ತಂಗುದಾಣಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ನಿರ್ಮಿಸಲಾಗುತ್ತಿದ್ದು, ಬಸ್ ತಂಗುದಾಣಗಳ ನಿರ್ಮಾಣ, ನಿರ್ವಹಣೆ ಮತ್ತು ನಿಯಂತ್ರಣ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಬರುತ್ತದೆ.<br>ನಾಗರಬಾವಿ ವೃತ್ತದಲ್ಲಿ ಬೃ.ಬೆಂ.ಮ.ಪಾಲಿಕೆಯಿಂದ ಬಸ್ ತಂಗುದಾಣವನ್ನು ನಿರ್ಮಿಸಲಾಗಿದೆ.<br>ನಾಗರಬಾವಿ ವೃತ್ತದ ಬಸ್ ತಂಗುದಾಣದ ಬಳಿ ಸಾರ್ವಜನಿಕ ಪ್ರಯಾಣಿಕರ ಸುರಕ್ಷತೆಗೆ ತೊಂದರೆಯಾಗದಂತೆ ಬೆಂ.ಮ.ಸಾ.ಸಂಸ್ಥೆಯ ಬಸ್ಸುಗಳನ್ನು ವ್ಯವಸ್ಥಿತವಾಗಿ ನಿಲ್ಲಿಸಿ, ಪ್ರಯಾಣಿಕರನ್ನು ಇಳಿಸಿ/ಹತ್ತಿಸಿಕೊಂಡು ಸಾರಿಗೆಗಳನ್ನು ಕಾರ್ಯಾಚರಿಸಲಾಗುತ್ತಿದೆ. |
| ಆ. | ಸದರಿ ಬಸ್ ನಿಲ್ದಾಣದಲ್ಲಿ ಸಂಜೆಯಿಂದ ರಾತ್ರಿ ತನಕ ಪುಂಡರು ತುಂಬಿಕೊಂಡಿರುವುದರಿಂದ ಮಹಿಳೆಯರು ಮತ್ತು ಹೆಣ್ಣು ಮಕ್ಕಳು ನಿಲ್ದಾಣಕ್ಕೆ ಹೋಗಲು ಭಯಪಡುತ್ತಿದ್ದು, ಈ ಸಮಸ್ಯೆ ಬಗೆಹರಿಸಲು ಸಾರಿಗೆ ಇಲಾಖೆ, ಪೊಲೀಸ್ ವ್ಯವಸ್ಥೆ ಮಾಡುವುದೇ; ಇಲ್ಲದಿದ್ದಲ್ಲಿ, ಕಾರಣಗಳೇನು? | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯಲ್ಲಿ ಈ ಕುರಿತು ಯಾವುದೇ ದೂರು ಸ್ವೀಕೃತವಾಗಿರುವುದಿಲ್ಲ. |

ಸಂಖ್ಯೆ: ಟಿಡಿ 56 ಟಿಸಿಕ್ಯೂ 2021

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು